# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 741

ಮಾನ್ಯ ಸದಸ್ಯರ ಹೆಸರು : ಶ್ರೀ ಎಂ.ಎ.ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 20-12-2021

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

*******

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಯಾವ ಯಾವ ಸಮುದ್ರ ತೀರ ಮತ್ತು ನದಿ ಭಾಗಗಳಲ್ಲಿ ವಾಟರ್ ಗೇಮ್ಸ್ ಗಳನ್ನು ನಡೆಸಲು ಅನುಮತಿ ನೀಡಲಾಗುತ್ತಿದೆ; ಇಲ್ಲಿ ಯಾವ ಯಾವ ಕ್ರೀಡೆಗಳನ್ನು ನಡೆಸಲು ಅನುಮತಿ ನೀಡಲಾಗಿದೆ ಮತ್ತು ಯಾವ ಯಾವ ಏಜೆನ್ಸಿ/ ಕಂಪನಿಗಳಿಗೆ ಎಷ್ಟು ವರ್ಷಗಳಿಗೆ ಅನುಮತಿ ನೀಡಲಾಗಿದೆ. (ಆದೇಶ ಸಹಿತ ಪ್ರಕರಣವಾರು ವಿವರ ನೀಡುವುದು) | ರಾಜ್ಯದ ಸಮುದ್ರ ತೀರ ಮತ್ತು ನದಿ ಭಾಗಗಳಲ್ಲಿ ವಾಟರ್ ಗೇಮ್ಸ್ ಗಳನ್ನು ನಡೆಸಲು ಏಜೆನ್ಸಿ ಕಂಪನಿಗಳಿಗೆ ಜಿಲ್ಲಾಡಳಿತದಿಂದ ಅನುಮತಿ ನೀಡಲಾಗಿದೆ. ವಿವರಗಳನ್ನು ಹಾಗೂ ಆದೇಶಗಳ ಪ್ರತಿಯನ್ನು ಈಗಾಗಲೇ ದಿನಾಂಕ: 13-09-2021ರಂದು ಕರ್ನಾಟಕ ವಿಧಾನ ಪರಿಷತ್ತಿನ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 61ರಲ್ಲಿ ಒದಗಿಸಲಾಗಿದೆ. |
| ಆ) | ಈ ಸಾಹಸ ಕ್ರೀಡೆಗಳನ್ನು ನಡೆಸುವ ಏಜೆನ್ಸಿ / ಕಂಪನಿಗಳನ್ನು ಆಯ್ಕೆ ಮಾಡಲು ಟೆಂಡರ್ ಗಳನ್ನು ಕರೆಯಲಾಗುತ್ತಿದೆಯೇ; ಅಥವಾ ಬೇರೆ ಯಾವುದಾದರು ಮಾನದಂಡಗಳ ಮೇಲೆ ಆಯ್ಕೆ ಮಾಡುಲಾಗುತ್ತಿದೆಯೇ; ಅನುಮತಿ ನೀಡಲು ಸರ್ಕಾರವು ನಿಗದಿಪಡಿಸಿರುವ ಮಾನದಂಡಗಳೇನು; (ಆದೇಶ ಸಹಿತಿ ವಿವರ ನೀಡುವುದು) | ಹೌದು.<br><br>ಸಂಬಂಧಪಟ್ಟ ಜಿಲ್ಲಾಡಳಿತದಿಂದ ಟೆಂಡರ್ ಕರೆದು ಏಜೆನ್ಸಿ/ಕಂಪನಿಗಳನ್ನು ಆಯ್ಕೆ ಮಾಡಲಾಗುತ್ತದೆ.<br><br>ಪ್ರವಾಸೋದ್ಯಮ ಇಲಾಖೆಯಿಂದ ಮಾನದಂಡಗಳನ್ನು ರೂಪಿಸಿರುವುದಿಲ್ಲ. ಸಂಬಂಧಪಟ್ಟ ಜಿಲ್ಲಾಡಳಿತಗಳು ಮಾನದಂಡಗಳನ್ನು ರೂಪಿಸಿ, ಟೆಂಡರ್ ಕರೆದು ಏಜೆನ್ಸಿಗಳನ್ನು ಆಯ್ಕೆ ಮಾಡಿ, ಕಾರ್ಯಾದೇಶ ನೀಡುತ್ತಾರೆ.<br><br>ಮಾನದಂಡಗಳ ವಿವರವನ್ನು ಈಗಾಗಲೇ ದಿನಾಂಕ: 13-09-2021ರಂದು ಕರ್ನಾಟಕ ವಿಧಾನ ಪರಿಷತ್ತಿನ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 61ರಲ್ಲಿ ಒದಗಿಸಲಾಗಿದೆ. |
| ಇ) | ಇಲ್ಲಿ ನಡೆಸುವಂತಹ ಕ್ರೀಡೆಗಳಿಗೆ ದರಗಳನ್ನು ನಿಗದಿ ಮಾಡಲಾಗಿದೆಯೆ; ಮಾಡಿದ್ದಲ್ಲಿ, ಅವುಗಳ ವಿವರ ನೀಡುವುದು: | ಉತ್ತರ ಕನ್ನಡ ಜಿಲ್ಲೆ, ಕಾರವಾರ ಕಡಲ ತೀರದಲ್ಲಿ ಸಾಹಸ ಕ್ರೀಡೆಗಳಿಗೆ ನಿಗಧಿ ಪಡಿಸಿರುವ ದರ ಕೆಳಕಂಡಂತಿದೆ. |

| | | |
|---|---|---|
| 1 | ಜೆಟ್‌ಸ್ಕೀ | 300/- |
| 2 | ಸ್ಪೀಡ್ ಬೋಟ್ | 100/- |
| 3 | ಪ್ಯಾರಾ ಸೇಲಿಂಗ್ | 800/- |
| 4 | ಬಂಪರ್ ರೈಡ್ | 800/- |
| 5 | ಫ್ಯಾಮಿಲಿ ಬೋಟ್ | 100/- |
| 6 | ಕಯಾಕ್ | 300/- |

<table>
<tr>
<td></td>
<td></td>
<td>
ಉಡುಪಿ ಜಿಲ್ಲೆಯಲ್ಲಿ ಮಲ್ಪೆ ಅಭಿವೃದ್ಧಿ ಸಮಿತಿಯು ಈ ಕೆಳಕಂಡಂತೆ ದರಗಳನ್ನು ನಿಗಧಿಪಡಿಸಿರುತ್ತದೆ.
<table>
<tr><th>ಕ್ರ. ಸಂ.</th><th>ಕ್ರೀಡೆ</th><th>ನಿಗಧಿಪಡಿಸಿದ ದರ</th></tr>
<tr><td>1</td><td>ಪ್ರವಾಸಿ ಬೋಟ್‌ಗಳು</td><td>250/-</td></tr>
<tr><td>2</td><td>ರೌಂಡಿಂಗ್ ಬೋಟ್</td><td>100/-</td></tr>
<tr><td>3</td><td>ವಾಟರ್ ಸ್ಕೂಟಿ ಬೋಟ್</td><td>250/-</td></tr>
</table>
ಕೊಡಗು ಜಿಲ್ಲೆಯಲ್ಲಿ ರಿವರ್ ರಾಫ್ಟಿಂಗ್ ನಡೆಸುವವರು ಪ್ರವಾಸಿಗರಿಂದ/ಸವಾರರಿಂದ ಪಡೆಯುವ ಟಿಕೇಟ್ ದರ ಸೀಸನ್‌ನಲ್ಲಿ ರೂ.600.00ಗಳು ಪ್ರತಿ ಸವಾರ(ವಯಸ್ಕ), ಆಫ್ ಸೀಸನ್‌ನಲ್ಲಿ ರೂ.200.00ಗಳ ದರ ನಿಗಧಿಪಡಿಸಿರುತ್ತಾರೆ.
</td>
</tr>
<tr>
<td>ಈ)</td>
<td>ಕಾಳಿ ನದಿಯ ತೀರದಲ್ಲಿ ಇರುವ ಹೋಟೆಲ್ ಮತ್ತು ರೆಸಾರ್ಟ್‌ಗಳು ಅಕ್ರಮವಾಗಿ ಇಂತಹ ಕ್ರೀಡೆಗಳನ್ನು ನಡೆಸುತ್ತಿದ್ದು ಸಾರ್ವಜನಿಕರಿಂದ ಬೇಕಾಬಿಟ್ಟಿಯಾಗಿ ಹಣ ವಸೂಲಿ ಮಾಡುತ್ತಿರುವುದು ಮತ್ತು ಸುರಕ್ಷತ ಕ್ರಮಗಳನ್ನು ಕೈಗೊಳ್ಳದೇ ಇದನ್ನೇ ದಂದೆಯಾಗಿಸಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಅವರುಗಳಿಗೆ ಸರ್ಕಾರದಿಂದ ಅನುಮತಿ / ಪರವಾನಿಗೆ ನೀಡಲಾಗಿದೆಯೇ; (ದಾಖಲೆ ಪ್ರತಿ ಒದಗಿಸುವುದು) ಬಂದಿದ್ದಲ್ಲಿ, ಈ ಸಂಬಂಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು: (ವಿವರ ನೀಡುವುದು)</td>
<td>ಬಂದಿದೆ.<br><br>ಅನುಮತಿ/ಪರವಾನಗಿ ನೀಡಲಾಗಿದೆ. ವಿವರಗಳ ಪ್ರತಿಯನ್ನು ಈಗಾಗಲೇ ದಿನಾಂಕ: 13-09-2021ರಂದು ಕರ್ನಾಟಕ ವಿಧಾನ ಪರಿಷತ್ತಿನ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 61ರಲ್ಲಿ ಒದಗಿಸಲಾಗಿದೆ.<br><br>ಪ್ರವಾಸಿಗರ ಸುರಕ್ಷತಾ ಹಿತದೃಷ್ಟಿಯಿಂದ, ಉತ್ತರ ಕನ್ನಡ ಜಿಲ್ಲೆ ಸಮುದ್ರ ಹಾಗೂ ನದಿ ತೀರಗಳಲ್ಲಿ ಲೈಫ್ ಜಾಕೇಟ್ ಧರಿಸದೇ ಜಲಕ್ರೀಡೆ ನಡೆಸುತ್ತಿರುವವರಿಗೆ ಉತ್ತರ ಕನ್ನಡ ಜಿಲ್ಲೆ, ಜಿಲ್ಲಾಡಳಿತದಿಂದ ನೋಟೀಸ್ ನೀಡಲಾಗಿರುತ್ತದೆ. ವಿವರಗಳ ಪ್ರತಿಯನ್ನು ಈಗಾಗಲೇ ದಿನಾಂಕ: 13-09-2021ರಂದು ಕರ್ನಾಟಕ ವಿಧಾನ ಪರಿಷತ್ತಿನ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 61ರಲ್ಲಿ ಒದಗಿಸಲಾಗಿದೆ.</td>
</tr>
<tr>
<td>ಉ)</td>
<td>ಇಂತಹ ಕ್ರೀಡೆಗಳನ್ನು ನಡೆಸುವವರಿಗೆ ಸರ್ಕಾರ ನೀಡುತ್ತಿರುವ ಸವಲತ್ತುಗಳೇನು ಮತ್ತು ಈ ಕ್ರೀಡೆಗಳಿಗೆ ಅನುಮತಿ ನೀಡಿರುವುದರಿಂದ ಕಳೆದ 3 ವರ್ಷಗಳಲ್ಲಿ ಸರ್ಕಾರಕ್ಕೆ ಬಂದಿರುವ ಆದಾಯವೆಷ್ಟು? (ವಿವರ ನೀಡುವುದು)</td>
<td>ಈ ಕ್ರೀಡೆಗಳನ್ನು ನಡೆಸಲು ಸಂಬಂಧಪಟ್ಟ ಜಿಲ್ಲಾಡಳಿತಗಳು ಅನುಮತಿ ನೀಡಿದ್ದು, ಕಳೆದ 3 ವರ್ಷಗಳಲ್ಲಿ ಬಂದಿರುವ ಆದಾಯದ ವಿವರ ಕೆಳಗಿನಂತಿದೆ.
<table>
<tr><th rowspan="2">ಕ್ರ. ಸಂ.</th><th rowspan="2">ಜಿಲ್ಲೆ</th><th colspan="3">ವರ್ಷ</th></tr>
<tr><th>2018-19</th><th>2019-20</th><th>2020-21</th></tr>
<tr><td>1</td><td>ಉತ್ತರಕನ್ನಡ, ಕಾರವಾರ</td><td>-</td><td>-</td><td>47,61,469/-</td></tr>
<tr><td>2</td><td>ಉಡುಪಿ</td><td>-</td><td>-</td><td>2,25,000/-</td></tr>
<tr><td>3</td><td>ದಕ್ಷಿಣ ಕನ್ನಡ</td><td>-</td><td>-</td><td></td></tr>
<tr><td>4</td><td>ಕೊಡಗು</td><td>21,000/-</td><td>13,92,290/-</td><td>5,10,000/-</td></tr>
</table>
</td>
</tr>
</table>

ಸಂಖ್ಯೆ: **TOR 321 TDV 2021**

**(ಆನಂದ್ ಸಿಂಗ್)**
ಪ್ರವಾಸೋದ್ಯಮ ಹಾಗೂ
ಪರಿಸರ ಮತ್ತು ಜೀವಿ ಶಾಸ್ತ್ರ, ಸಚಿವರು